**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಮಂತ್ರಾಲಯ, ಭಾರತ ಸರ್ಕಾರ, ನವದೆಹಲಿ ಇವರ ಅಧಿಸೂಚನೆ ಸಂಖ್ಯೆ:ಜಿಎಸ್‌ಆರ್/218(ಇ), ದಿನಾಂಕ:27–3–2014.ರಲ್ಲಿ ಮಾನವ ಅಂಗಾಂಗ ಮತ್ತು ಅಂಗಾಂಶ ಕಸಿ ಜೋಡಣೆ ನಿಯಮಗಳು 1995 ಕ್ಕೆ ಕೆಲವು ತಿದ್ದುಪಡಿಗಳನ್ನು ಮಾಡಿ ಪ್ರಕಟಣೆ ಹೊರಡಿಸಿದೆ. ಅದರಂತೆ ನೆಫ್ರೋಯುರಾಲಜಿ ಸಂಸ್ಥೆ, ವಿಕ್ಟೋರಿಯಾ ಆಸ್ಪತ್ರೆಯ ಆವರಣ ಬೆಂಗಳೂರು ರವರು ಈಗ ಅಸ್ತಿತ್ವದಲ್ಲಿರುವ ರಾಜ್ಯ ಮಟ್ಟದ ಅಧಿಕಾರಯುಕ್ತ ಸಮಿತಿಯನ್ನು ಪುನರ್ ರಚಿಸಲು ಕೋರಿ 7 ಜನ ಸದಸ್ಯರುಗಳ ಹೆಸರುಗಳನ್ನು ಹಾಗೂ ಮಾಹಿತಿಯನ್ನು ಸಲ್ಲಿಸಿರುತ್ತಾರೆ.

ಆದುದರಿಂದ, ಉಲ್ಲೇಖ (1)ರ ಅಧಿಸೂಚನೆಯ ನಿಯಮ 11(1) ಮತ್ತು 13 ರಂತೆ ರಾಜ್ಯ ಮಟ್ಟದ ಅಧಿಕಾರಯುಕ್ತ ಸಮಿತಿಯನ್ನು ಪುನರ್ ರಚಿಸಲು ದಿನಾಂಕ:3–5–2014 ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ತೀರ್ಮಾನಿಸಿದಂತೆ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಮತ್ತು ಆಯುಷ್ ಇಲಾಖೆ, ಅಧ್ಯಕ್ಷರು, ಮಾನವ ಅಂಗಾಂಗ ಮತ್ತು ಅಂಗಾಂಶಗಳ ಕಸಿ ಜೋಡಣಾ ಅಧಿಕಾರಯುಕ್ತ ಪ್ರಾಧಿಕಾರ ಸಮಿತಿ, ಬೆಂಗಳೂರು ರವರು ಸದರಿ ರಾಜ್ಯ ಮಟ್ಟದ ಅಧಿಕಾರಯುಕ್ತ ಸಮಿತಿಯನ್ನು ಪುನರ್ ರಚಿಸಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 87 ಎಫ್‌ಪಿಆರ್ 2014,ಬೆಂಗಳೂರು, ದಿನಾಂಕ:12–06–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಉಲ್ಲೇಖ(1)ರ ಅಧಿಸೂಚನೆಯ ನಿಯಮ 11(1) ಮತ್ತು 13 ರಂತೆ ಹಾಗೂ ಉಲ್ಲೇಖ (2)ರ ಕೋರಿಕೆಯಂತೆ ನೆಫ್ರೋಯುರಾಲಜಿ ಸಂಸ್ಥೆ, ವಿಕ್ಟೋರಿಯಾ ಆಸ್ಪತ್ರೆಯ ಆವರಣ ಬೆಂಗಳೂರು ಆಸ್ಪತ್ರೆಯಲ್ಲಿ ಮಾನವ ಅಂಗಾಂಗಗಳ ಮತ್ತು ಅಂಗಾಂಶಗಳ ಕಸಿ ಜೋಡಣೆಗಾಗಿ ರಾಜ್ಯ ಮಟ್ಟದ ಅಧಿಕಾರಿಯುಕ್ತ ಸಮಿತಿಯನ್ನು ಈ ಕೆಳಕಂಡಂತೆ ಪುನರ್ ರಚಿಸಿದೆ. ಕ್ರಮ ಸಂಖ್ಯೆ 2 ರಿಂದ 5 ರವರೆಗಿನ ನಾಮನಿರ್ದೇಶಿತ ಸದಸ್ಯರ ಅವಧಿಯು 2 ವರ್ಷಗಳಿಗೆ ಸೀಮಿತವಾಗಿರುತ್ತದೆ.

| | | |
|---|---|---|
| 1. | ನಿರ್ದೇಶಕರು, ನೆಫ್ರೋಯುರಾಲಜಿ ಸಂಸ್ಥೆ,ಬೆಂಗಳೂರು | ಅಧ್ಯಕ್ಷರು |
| 2 | ಡಾ: ಕೆ. ರವಿ, ವೈದ್ಯಶಾಸ್ತ್ರದ ಪ್ರಾಧ್ಯಾಪಕರು, ಬೌರಿಂಗ್ ಮತ್ತು ಲೇಡಿ ಕರ್ಜನ್ ಆಸ್ಪತ್ರೆ, ಶಿವಾಜಿನಗರ, ಬೆಂಗಳೂರು. | ಸದಸ್ಯರು |
| 3 | ಡಾ: ರಂಗನಾಥ್ ಟಿ.ಎಸ್. ಪ್ರಾಧ್ಯಾಪಕರು ಮತ್ತು ವಿಭಾಗೀಯ ಮುಖ್ಯಸ್ಥರು, ಕಮ್ಯೂನಿಟಿ ಮೆಡಿಸನ್ ಬಿ.ಎಂ.ಸಿ.ಆರ್.ಐ. ಬೆಂಗಳೂರು. | ಸದಸ್ಯರು |
| 4 | ಶ್ರೀ ವಿ.ಕೆ. ಪಾಟೀಲ್, ನಿವೃತ್ತ ಉಪ ನಿರ್ದೇಶಕರು, ಪ್ರಾಸಿಕ್ಯೂಷನ್, ಬೆಂಗಳೂರು. | ಸದಸ್ಯರು |
| 5 | ಡಾ: ಸಿ.ಎಸ್. ಹನುಮಂತಪ್ಪ, ಎಂ.ಎಸ್.ಎಂ.ಸಿ.ಹೆಚ್. ನಿವೃತ್ತ ಹಿರಿಯ ತಜ್ಞರು, ಗೌರವ ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ವೈದ್ಯಾಧಿಕಾರಿಗಳ ಸಂಘ, ಬೆಂಗಳೂರು. | ಸದಸ್ಯರು |
| 6 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಬೆಂಗಳೂರು ಅಥವಾ ಇವರನ್ನು ಪ್ರತಿನಿಧಿಸುವ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ ಸೇರಿದ ಉಪ ಕಾರ್ಯದರ್ಶಿ ಜಂಟಿ ನಿರ್ದೇಶಕರ ಹುದ್ದೆಗಿಂತ ಕಡಿಮೆ ದರ್ಜೆಯಲ್ಲಿರದ ನಾಮನಿರ್ದೇಶಿತ ಒಬ್ಬ ಅಧಿಕಾರಿ. | ಸದಸ್ಯರು |
| 7 | ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಅಥವಾ ಇವರನ್ನು ಪ್ರತಿನಿಧಿಸುವ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ ಸೇರಿದ ಉಪ ನಿರ್ದೇಶಕರ ಹುದ್ದೆಗಿಂತ ಕಡಿಮೆ ದರ್ಜೆಯಲ್ಲಿರದ ನಾಮನಿರ್ದೇಶಿತ ಒಬ್ಬ ಅಧಿಕಾರಿ | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮೀರಾಬಾಯಿ**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**PR. 523**

**SC. 100**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** 20 ವರ್ಷಗಳ ಸೇವೆ ಸಲ್ಲಿಸಿದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗೆ ಸೇರಿದ ಉಪ ಮುಖ್ಯ ವೈದ್ಯಾಧಿಕಾರಿ ಹಾಗೂ ಹಿರಿಯ ತಜ್ಞರಿಗೆ ಕಾಲಮಿತಿ ಮುಂಬಡ್ತಿ ಮಂಜೂರು ಮಾಡಲು ನೇಮಕಾತಿ ಪ್ರಾಧಿಕಾರ ಮತ್ತು ವೃಂದಬಲ ನಿರ್ಧರಣೆ ಕುರಿತು.

**ಓದಲಾಗಿದೆ:**

1) ಸರ್ಕಾರದ ಆದೇಶ ಸಂಖ್ಯೆ:ಆಕುಕ 222 ಎಂಎಸ್‌ಎಸ್ 1990, ದಿನಾಂಕ:19–7–1991
2) ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಅವರ ಪತ್ರ ಸಂಖ್ಯೆ:ಜೆಆರ್‌ಓ (1ಎ) 146 2011–12, ದಿನಾಂಕ:18–11–2011,
3) ಸರ್ಕಾರದ ಆದೇಶ ಸಂಖ್ಯೆ:ಆಕುಕ 557 ಹೆಚ್‌ಎಸ್‌ಹೆಚ್ 2011, ದಿನಾಂಕ:3–1–2011
4) ಸರ್ಕಾರಿ ಪತ್ರ ಸಂಖ್ಯೆ:ಆಕುಕ 26 ಹೆಚ್‌ಎಸ್‌ಹೆಚ್ 2013, ದಿನಾಂಕ:30–3–2013, 1–10–2013, 19–11–2013 ಹಾಗೂ 3–2–2014
5) ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಅವರ ಪತ್ರ ಸಂಖ್ಯೆ:ಜೆಆರ್‌ಓ 135/2012–2013 ದಿನಾಂಕ:24–10–2013, 21–1–2014 ಹಾಗೂ 15–02–2014

**ಪ್ರಸ್ತಾವನೆ:**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯಲ್ಲಿ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಯಾಗಿ (ಅಂದಿನ Assistant Surgeon cum Health Officers) ನೇಮಕಗೊಳ್ಳುವ ಎಂಬಿಬಿಎಸ್ ವಿದ್ಯಾರ್ಹತೆಯ ವೈದ್ಯಾಧಿಕಾರಿಗಳು 6 ವರ್ಷಗಳ ಸೇವೆ ಪೂರೈಸಿದರೆ ಕಾಲಮಿತಿ ಮುಂಬಡ್ತಿ ಯೋಜನೆಯಡಿ ಹಿರಿಯ ವೈದ್ಯಾಧಿಕಾರಿಯಾಗಿ ಹಾಗೂ ಸ್ನಾತಕೋತ್ತರ ಪದವಿ/ಡಿಪ್ಲೊಮಾ ಹೊಂದಿದ್ದಲ್ಲಿ ತಜ್ಞ ವೈದ್ಯರಾಗಿ ಮುಂಬಡ್ತಿ ಪಡೆಯಲು ಮೇಲೆ (1)ರಲ್ಲಿ ಓದಲಾದ ದಿನಾಂಕ:19–7–1991ರ ಸರ್ಕಾರಿ ಆದೇಶದಲ್ಲಿ ಅವಕಾಶ ಕಲ್ಪಿಸಲಾಗಿದೆ. ಮುಂದುವರೆದು, ಸದರಿ ವೈದ್ಯಾಧಿಕಾರಿಗಳು 13 ವರ್ಷಗಳ ಸೇವೆ ಪೂರೈಸಿದರೆ ಕ್ರಮವಾಗಿ ಉಪ ಮುಖ್ಯ ವೈದ್ಯಾಧಿಕಾರಿ/ಹಿರಿಯ ತಜ್ಞರಾಗಿ ಮುಂಬಡ್ತಿ ಪಡೆಯಲೂ ಸಹ ಸದರಿ ಆದೇಶದಲ್ಲಿ ಅವಕಾಶ ಕಲ್ಪಿಸಲಾಗಿದೆ. ಈ ಹುದ್ದೆಗಳು ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಸೇರ್ಪಡೆಯಾಗಿವೆ.

ಸರ್ಕಾರದ ಸಾಮಾನ್ಯ ನೀತಿಯ ಪ್ರಕಾರ ಒಬ್ಬ ಸರ್ಕಾರಿ ನೌಕರನು ತನ್ನ ಸೇವಾವಧಿಯಲ್ಲಿ 3 ಪದೋನ್ನತಿಗಳನ್ನು ಪಡೆಯುವ ಅವಕಾಶವಿರಬೇಕು ಎಂಬ ಹಿನ್ನೆಲೆಯಲ್ಲಿ ಹಾಗೂ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಉಪ ಮುಖ್ಯ ವೈದ್ಯಾಧಿಕಾರಿ ಹಾಗೂ ಹಿರಿಯ ತಜ್ಞರಾಗಿ ಕೇವಲ 2 ಕಾಲಮಿತಿ ಪದೋನ್ನತಿಗಳನ್ನು ಪಡೆದು ಮುಂದಿನ ಬಡ್ತಿಯ ಅವಕಾಶದಿಂದ ವಂಚಿತರಾಗುತ್ತಿರುವುದರಿಂದ ಈ ಒಂದು ಅಸಮತೋಲನವನ್ನು ಸರಿಪಡಿಸಲು ಇಲಾಖೆಯಲ್ಲಿ 20 ವರ್ಷಗಳ ಕಾಲ ಸೇವೆ ಸಲ್ಲಿಸಿದ ಉಪ ಮುಖ್ಯ ವೈದ್ಯಾಧಿಕಾರಿ ಹಾಗೂ ಹಿರಿಯ ತಜ್ಞರಿಗೆ 3ನೇ ಕಾಲಮಿತಿ ಪದೋನ್ನತಿ ಮಂಜೂರು ಮಾಡಲು ಮೇಲೆ ಓದಲಾದ ಕ್ರಮಾಂಕ:(2) ರ ಪತ್ರದಲ್ಲಿ ಆಯುಕ್ತರು ಪ್ರಸ್ತಾವನೆಯನ್ನು ಸಲ್ಲಿಸಿದ್ದರ ಮೇರೆಗೆ ಮೇಲೆ ಓದಲಾದ ಕ್ರಮಾಂಕ –3ರ ಸರ್ಕಾರಿ ಆದೇಶವನ್ನು ಆರ್ಥಿಕ ಇಲಾಖೆಯ ಸಹಮತದ ಮೇರೆಗೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ 20 ವರ್ಷಗಳ ಸೇವೆ ಸಲ್ಲಿಸಿ ಪ್ರಸ್ತುತ ಉಪ ಮುಖ್ಯ ವೈದ್ಯಾಧಿಕಾರಿ ಹಾಗೂ ಹಿರಿಯ ತಜ್ಞರಾಗಿ ಕರ್ತವ್ಯ ನಿರ್ವಹಿಸುತ್ತಿರುವವರಿಗೆ ವೇತನ ಶ್ರೇಣಿ ರೂ.38100–55200 ರಲ್ಲಿ ಕ್ರಮವಾಗಿ ಉಪ ಮುಖ್ಯ ವೈದ್ಯಾಧಿಕಾರಿ (ಆಯ್ಕೆ ಶ್ರೇಣಿ) ಹಾಗೂ ಹಿರಿಯ ತಜ್ಞರು (ಆಯ್ಕೆ ಶ್ರೇಣಿ) ಎಂಬುದಾಗಿ ಪದನಾಮವನ್ನು ನೀಡಿ 3ನೇ ಕಾಲಮಿತಿ ಪದೋನ್ನತಿಯನ್ನು ನೀಡಲು ಮಂಜೂರಾತಿ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮಾಂಕ:4ರ ಪತ್ರದಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ 20 ವರ್ಷ ಸೇವೆ ಸಲ್ಲಿಸಿ ಪ್ರಸ್ತುತ ಉಪ ಮುಖ್ಯ ವೈದ್ಯಾಧಿಕಾರಿ ಹಾಗೂ ಹಿರಿಯ ತಜ್ಞರಾಗಿ ಕಾರ್ಯನಿರ್ವಹಿಸುತ್ತಿರುವವರಿಗೆ ದಿನಾಂಕ: 3–1–2012ರ ಆದೇಶದಲ್ಲಿ 3ನೇ ಕಾಲಮಿತಿ ಪದೋನ್ನತಿಯನ್ನು ನೀಡಲು ಹಾಲಿ ಚಾಲ್ತಿಯಲ್ಲಿರುವ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಅಳವಡಿಸಲು ಸರ್ಕಾರಕ್ಕೆ ಪ್ರತ್ಯೇಕ ಪ್ರಸ್ತಾವನೆಯನ್ನು ಸಲ್ಲಿಸಬೇಕಾಗಿರುತ್ತದೆ. ಆ ಹಿನ್ನೆಲೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 97 ಎಸ್ಆರ್‌ಡಿ 2004, ದಿನಾಂಕ:8–10–2004ರ ರೀತ್ಯ ವೃಂದ ಮತ್ತು ನೇಮಕಾತಿ ನಿಯಮಗಳ ಸಮಗ್ರ ಪರಿಷ್ಕರಣೆಯ ಪ್ರಸ್ತಾವನೆಯನ್ನು ಸಲ್ಲಿಸುವಂತೆ ದಿನಾಂಕ:30–3–2013ರಲ್ಲಿ ಕೋರಲಾಗಿತ್ತು ಹಾಗೂ 1–10–2013ರ ಪತ್ರದಲ್ಲಿ ನೆನಪೋಲೆ ಹೊರಡಿಸಲಾಗಿತ್ತು. ಆಯುಕ್ತರು ದಿನಾಂಕ:17–10–2012ರಂದು 3ನೇ ಕಾಲಮಿತಿ ಪದೋನ್ನತಿಯನ್ನು ಮಂಜೂರು ಮಾಡಲು ವೃಂದ ಮತ್ತು ನೇಮಕಾತಿ ನಿಯಮಗಳಿಗೆ ಜರೂರಾಗಿ ತಿದ್ದುಪಡಿ ತರಲು ಕೋರಿರುತ್ತಾರೆ. ತದನಂತರ ದಿನಾಂಕ:24–10–2013ರ ಪತ್ರದಲ್ಲಿ ಇಲಾಖೆಯ ಸಮಗ್ರ ವೃಂದ ಮತ್ತು ನೇಮಕಾತಿ ನಿಯಮಗಳ ಪರಿಷ್ಕರಣೆಯನ್ನು ಪ್ರತ್ಯೇಕವಾಗಿ ಪರಿಗಣಿಸಬೇಕೆಂದು ಹಾಗೂ ಈಗಾಗಲೇ ಸಾಕಷ್ಟು ಉಪ ಮುಖ್ಯ ವೈದ್ಯಾಧಿಕಾರಿಗಳು ಹಾಗೂ ಹಿರಿಯ ತಜ್ಞರು 20 ವರ್ಷಗಳ ಕಾಲಮಿತಿ ಮುಂಬಡ್ತಿಗೆ ಅರ್ಹರಿದ್ದರೂ ಸಹ ಮುಂಬಡ್ತಿ ಪಡೆಯಲಾಗದೇ ವಯೋನಿವೃತ್ತಿ ಹೊಂದುತ್ತಾರೆಂದು ತಿಳಿಸಿ ಅರ್ಹ ವೈದ್ಯರಿಗೆ 3ನೇ ಕಾಲಮಿತಿ ಮುಂಬಡ್ತಿ ಮಂಜೂರು ಮಾಡಲು ಅನುಮತಿ ನೀಡಲು ಕೋರಿರುತ್ತಾರೆ.

ಆಯುಕ್ತರು ದಿನಾಂಕ:21–1–2014ರಲ್ಲಿ 1991ರಲ್ಲಿ ವೈದ್ಯರ ವೃಂದಬಲವು 4477ರಷ್ಟಿದ್ದು, ನಂತರ ಮೇಲ್ದರ್ಜೆಗೇರಿಸಿರುವ ಆಸ್ಪತ್ರೆಗಳು ಹೊಸದಾಗಿ ಮಂಜೂರಾದ ಹುದ್ದೆಗಳು ಸೇರಿದಂತೆ ಹಾಲಿ 6229 ವೃಂದಬಲಕ್ಕೇರಿದ್ದು, ಅದನ್ನು ಹೊಸದಾಗಿ 4 ವೃಂದಗಳಲ್ಲಿ ವರ್ಗೀಕರಿಸಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯಲ್ಲಿ ಹಾಲಿ ವೈದ್ಯ ವೃಂದದ ವೃಂದಬಲ 6229 ಇದ್ದು, ಈ ಹುದ್ದೆಗಳ ಪೈಕಿ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಹಿರಿಯ ವೈದ್ಯಾಧಿಕಾರಿ/ತಜ್ಞರು ಮತ್ತು ಉಪ ಮುಖ್ಯ ವೈದ್ಯಾಧಿಕಾರಿ/ಹಿರಿಯ ತಜ್ಞರ ವೃಂದದಲ್ಲಿ ಎಷ್ಟು ಹುದ್ದೆ ಮಂಜೂರಾಗಿತ್ತು ಎಂಬ ಮಾಹಿತಿಯನ್ನು ಒದಗಿಸುವಂತೆ ದಿನಾಂಕ:3–2–2014ರ ಪತ್ರದಲ್ಲಿ ಕೋರಲಾದಂತೆ ದಿನಾಂಕ:15–2–2014ರಲ್ಲಿ ಮಂಜೂರಾದ 6229 ಹುದ್ದೆಗಳನ್ನು ಮಂಜೂರಾದ ವೃಂದಬಲದ ವಿವರಗಳನ್ನು ಸಲ್ಲಿಸಿ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಹಿರಿಯ ವೈದ್ಯಾಧಿಕಾರಿ/ತಜ್ಞರು ಮತ್ತು ಉಪ ಮುಖ್ಯ ವೈದ್ಯಾಧಿಕಾರಿ/ಹಿರಿಯ ತಜ್ಞರು ಮತ್ತು ಉಪ ಮುಖ್ಯ ವೈದ್ಯಾಧಿಕಾರಿ/ಹಿರಿಯ ತಜ್ಞರು (ಆಯ್ಕೆ ಶ್ರೇಣಿ)ಗಳನ್ನೊಳಗೊಂಡಂತೆ ಪರಿಷ್ಕೃತ ವೃಂದಬಲದ ವೃಂದವಾರು ಮಾಹಿತಿಯನ್ನು ಸಲ್ಲಿಸಿ 3ನೇ ಕಾಲಮಿತಿ ಮುಂಬಡ್ತಿಯನ್ನು ಮಂಜೂರು ಮಾಡಲು ಕೋರಿರುತ್ತಾರೆ.

ಅದರಂತೆ ಪ್ರಸ್ತಾವನೆಯನ್ನು ಪರಿಶೀಲಿಸಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯಲ್ಲಿ ಮಂಜೂರಾದ 6229 ವೈದ್ಯ ವೃಂದದ ವೃಂದಬಲವನ್ನು ಈ ಕೆಳಕಂಡಂತೆ ವೃಂದವಾರು ಬಲವನ್ನು ಪರಿಷ್ಕರಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಆಕುಕ 26 ಹೆಚ್ಎಸ್‌ಹೆಚ್ 2013, ಬೆಂಗಳೂರು, ದಿನಾಂಕ:22–5–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಸರ್ಕಾರಿ ಆದೇಶ ಸಂಖ್ಯೆ:ಆಕುಕ 222 ಎಂಎಸ್ಎಸ್ 1990, ದಿನಾಂಕ:19–7–1990ರಲ್ಲಿ ನಮೂದಿಸಲ್ಪಟ್ಟಂತಹ ವೃಂದಬಲವನ್ನು ಪರಿಷ್ಕರಿಸಿ ಈ ಕೆಳಕಂಡಂತೆ ವೃಂದವಾರು ವೃಂದಬಲವನ್ನು ನಿಗದಿಪಡಿಸಲಾಗಿದೆ.

| ಕ್ರ. ಸಂ. | ಹಾಲಿ ಇರುವ ಪದನಾಮ | 1991ರ ಸರ್ಕಾರಿ ಆದೇಶದಲ್ಲಿ ನಿಗದಿಪಡಿಸಲಾದ ವೃಂದಬಲದ ಸಂಖ್ಯೆ | ಪರಿಷ್ಕೃತ ಪದನಾಮ | ಪರಿಷ್ಕೃತ ವೃಂದ ಬಲದ ಸಂಖ್ಯೆ |
|---|---|---|---|---|
| 1 | ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ (6 ವರ್ಷಗಳವರೆಗೆ) 2353 ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ | 1550 | ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ (6 ವರ್ಷಗಳ ವರೆಗೆ) 2353 ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ (ಪ್ರಾಥಮಿಕ ಆರೋಗ್ಯ ಘಟಕಗಳನ್ನು ಮೇಲ್ದರ್ಜೆಗೇರಿಸಿದ್ದರಿಂದ ಹಾಗೂ ಹೊಸದಾಗಿ ಸ್ಥಾಪಿಸಲಾದ ಕೇಂದ್ರಗಳಿಂದ ವೃಂದಬಲ ಹೆಚ್ಚಾಗಿರುತ್ತದೆ). | 2353 |

| ಕ್ರ. ಸಂ. | ಹಾಲಿ ಇರುವ ಪದನಾಮ | 1991ರ ಸರ್ಕಾರಿ ಆದೇಶದಲ್ಲಿ ನಿಗದಿಪಡಿಸಲಾದ ವೃಂದಬಲದ ಸಂಖ್ಯೆ | ಪರಿಷ್ಕೃತ ಪದನಾಮ | ಪರಿಷ್ಕೃತ ವೃಂದ ಬಲದ ಸಂಖ್ಯೆ |
|---|---|---|---|---|
| 2 | ಹಿರಿಯ ವೈದ್ಯಾಧಿಕಾರಿ/ತಜ್ಞರು (ಸಮುದಾಯ ಆರೋಗ್ಯ ಕೇಂದ್ರ, ರಾಷ್ಟ್ರೀಯ ಕುಷ್ಠರೋಗ ನಿಯಂತ್ರಣ, ತಾಲ್ಲೂಕು ಆರೋಗ್ಯಾಧಿಕಾರಿ, ಹಿರಿಯ ವೈದ್ಯಾಧಿಕಾರಿ) ಮೊದಲನೇ ಕಾಲಮಿತಿ ಬಡ್ತಿ 6 ವರ್ಷಗಳ ನಂತರ ಹಾಗೂ ತಜ್ಞರ ನೇರ ನೇಮಕಾತಿ ವೃಂದವನ್ನೊಳ ಗೊಂಡಂತೆ) | 1331 | ಹಿರಿಯ ವೈದ್ಯಾಧಿಕಾರಿ/ತಜ್ಞರು(ಸಮುದಾಯ ಆರೋಗ್ಯ ಕೇಂದ್ರ, ರಾಷ್ಟ್ರೀಯ ಕುಷ್ಠರೋಗ ನಿಯಂತ್ರಣ, ತಾಲ್ಲೂಕು ಆರೋಗ್ಯಾಧಿಕಾರಿ, ಹಿರಿಯ ವೈದ್ಯಾಧಿಕಾರಿ, ಮೊದಲನೇ ಕಾಲಮಿತಿ ಬಡ್ತಿ 6 ವರ್ಷಗಳ ನಂತರ ಹಾಗೂ ತಜ್ಞರ ನೇರ ನೇಮಕಾತಿ ವೃಂದವನ್ನೊಳಗೊಂಡಂತೆ) | 1190 |
| 3 | ಉಪ ಮುಖ್ಯ ವೈದ್ಯಾಧಿಕಾರಿಗಳು (ಎರಡನೇ ಕಾಲಮಿತಿ ಬಡ್ತಿ 13 ವರ್ಷಗಳ ನಂತರ), ಹಿರಿಯ ತಜ್ಞರು (ತಜ್ಞರ ವೃಂದಕ್ಕೆ ನೇರ ನೇಮಕಾತಿಗೊಂಡವರಿಗೆ ಕಾಲಮಿತಿ ಬಡ್ತಿ 7 ವರ್ಷಗಳ ನಂತರ (ಸಾರ್ವಜನಿಕ ಆಸ್ಪತ್ರೆ ಹಾಗೂ ಕಾರ್ಯಕ್ರಮಾಧಿಕಾರಿಗಳು) | 1596 | ಉಪ ಮುಖ್ಯ ವೈದ್ಯಾಧಿಕಾರಿಗಳು (ಎರಡನೇ ಕಾಲಮಿತಿ ಬಡ್ತಿ 13 ವರ್ಷಗಳ ನಂತರ), ಹಿರಿಯ ತಜ್ಞರು (ತಜ್ಞರ ವೃಂದಕ್ಕೆ ನೇರ ನೇಮಕಾತಿಗೊಂಡವರಿಗೆ ಕಾಲಮಿತಿ ಬಡ್ತಿ 7 ವರ್ಷಗಳ ನಂತರ (ಸಾರ್ವಜನಿಕ ಆಸ್ಪತ್ರೆ ಹಾಗೂ ಕಾರ್ಯಕ್ರಮಾಧಿಕಾರಿಗಳು) ಮೇಲ್ದರ್ಜೆಗೇರಿಸುವಿಕೆಯಿಂದ ಸೃಜಿಸಲಾದ ಹುದ್ದೆಗಳ ಸಂಖ್ಯೆ | 1627 |
| 4 | ಉಪ ಮುಖ್ಯ ವೈದ್ಯಾಧಿಕಾರಿಗಳು (ಮೂರನೇ ಕಾಲಮಿತಿ ಬಡ್ತಿ 20 ವರ್ಷಗಳ ನಂತರ), ಹಿರಿಯ ತಜ್ಞರು (ತಜ್ಞರ ವೃಂದಕ್ಕೆ ನೇರ ನೇಮಕಾತಿಗೊಂಡವರಿಗೆ ಕಾಲಮಿತಿ ಬಡ್ತಿ 14 ವರ್ಷಗಳ ನಂತರ (ಸಾರ್ವಜನಿಕ ಆಸ್ಪತ್ರೆ ಜಿಲ್ಲಾ ಆಸ್ಪತ್ರೆ ಹಾಗೂ ಪ್ರಮುಖ ಆಸ್ಪತ್ರೆಗಳು) | (ಹೊಸದಾಗಿ ಗುರುತಿಸಲಾದ ಹುದ್ದೆಗಳು) | ಉಪ ಮುಖ್ಯ ವೈದ್ಯಾಧಿಕಾರಿಗಳು (ಮೂರನೇ ಕಾಲಮಿತಿ ಬಡ್ತಿ 20 ವರ್ಷಗಳ ನಂತರ), ಹಿರಿಯ ತಜ್ಞರು (ತಜ್ಞರ ವೃಂದಕ್ಕೆ ನೇರ ನೇಮಕಾತಿಗೊಂಡವರಿಗೆ ಕಾಲಮಿತಿ ಬಡ್ತಿ 14 ವರ್ಷಗಳ ನಂತರ (ಸಾರ್ವಜನಿಕ ಆಸ್ಪತ್ರೆ, ಜಿಲ್ಲಾ ಆಸ್ಪತ್ರೆ ಹಾಗೂ ಪ್ರಮುಖ ಆಸ್ಪತ್ರೆಗಳು) | 1059 |
| | **ಒಟ್ಟು** | **4477** | **ಒಟ್ಟು** | 6229 |

ಸರ್ಕಾರಿ ಆದೇಶ ಸಂಖ್ಯೆ:ಆಕುಕ 222 ಎಂಎಸ್ಎಸ್ 1990, ದಿನಾಂಕ:19-7-1991ರ ಆದೇಶದಲ್ಲಿ ಈ ಕಾಲಮಿತಿ ಪದೋನ್ನತಿಯನ್ನು ನೀಡಲು ಅನುಸರಿಸಬೇಕಾದ ವಿಧಾನ ಹಾಗೂ ಷರತ್ತುಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ. ಈ ಕಾಲಮಿತಿ ಮುಂಬಡ್ತಿ ಪದೋನ್ನತಿಯನ್ನು ನೇಮಕಾತಿ ಪ್ರಾಧಿಕಾರದ ಅನುಮೋದನೆಯೊಂದಿಗೆ ಹೊರಡಿಸತಕ್ಕದ್ದು. ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಅವರು ಮೇಲ್ಕಂಡ ವೃಂದಗಳನ್ನೊಳಗೊಂಡಂತೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳ ಸಮಗ್ರ ಪರಿಷ್ಕರಣೆಯನ್ನು ಸರ್ಕಾರಕ್ಕೆ ಪ್ರತ್ಯೇಕವಾಗಿ ಪ್ರಸ್ತಾವನೆಯನ್ನು ಸಲ್ಲಿಸತಕ್ಕದ್ದು,

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 44 ಎಸ್ಆರ್‌ಪಿ 2011, ದಿನಾಂಕ:31-12-2011ರಲ್ಲಿ ನೀಡಿರುವ ಸಹಮತಿ ಹಾಗೂ ಸರ್ಕಾರದ ಆದೇಶ ಸಂಖ್ಯೆ:ಆಇ 01 ಟಿಎಫ್‌ಪಿ 1996, ದಿನಾಂಕ:1-7-1996ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಸ್.ನಾಗರಾಜ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು).

PR. 472

SC. 500

## COMMERCE & INDUSTRIES SECRETARIAT

**Sub**: Approval to the proposal of M/s Himatsingka Seide Ltd. to establish a textile based unit to manufacture "Bed Linens" at Textile SEZ, Hasan District.

**Read**: Proceedings of the 34th State High Level Clearance Committee (SHLCC) meeting held on 04.03.2014.

**Preamble:**

M/s Himatsingka Seide Ltd. has proposed to establish a textile based unit to manufacture "Bed Linens", with an investment of Rs. 140.00 crore, generating employment to about 663 persons at SEZ Textile Zone, Hasan District.

The proposal was examined in the 34th State High Level Clearance Committee (SHLCC) Meeting held on 04.03.2014. Government has examined the recommendations made by the State High Level Clearance Committee, in all aspects.

Hence the following order.

**GOVERNMENT ORDER No. CI 89 SPI 2014, BANGALORE, DATED : 07.05.2014**

Government is pleased to accord in principle approval to the investment proposal of M/s Himatsingka Seide Ltd. to establish a textile based unit to manufacture "Bed Linens", with an investment of Rs. 140.00 crore at Textile SEZ, Hasan District, generating employment to about 663 persons with the following infrastructure assistances, incentives and concessions:

| | |
|---|---|
| **Land :** | KIADB to allot 20 Acres of land in Textile SEZ, Hassan Taluk and District. |
| **Power :** | 12500 KVA from MESCOM. |
| **Water :** | 5.00 lakh LPD from KIADB. |
| **Incentives & Concessions :** | The unit is eligible to avail incentives and concessions as per the applicable SEZ Policy of the State. |

**Sanction of the above infrastructure facilities, incentives and concessions is subject to the following terms and conditions:**

1. **Environment:** The company to obtain Consent for Establishment and Consent for Operation from KSPCB and environmental clearance from MoEF, Govt. of India or the Dept of Forest, Ecology & Environment, Govt. of Karnataka, if applicable.
2. **Employment:** The Company shall comply with the provisions of Industrial Policy of Govt. of Karnataka and Dr. Sarojini Mahishi Report. Prepare a plan for development of Human Resources required for the project, train local people. A copy of Human Resources Development plan shall be sent to the Commissioner for Industrial Development& Director of Industries and Commerce for monitoring.
3. **Vendor Development:** Wherever there is scope for vendor development for the project, the company shall prepare a vendor development plan, develop local vendors and procure the required inputs, components and sub-assemblies from these local vendor units. A copy of the vendor development plan shall be sent to the Commissioner for Industrial Development & Director of Industries and Commerce for monitoring.
4. **Social Infrastructure Development:** The Company is advised to take up social infrastructure development projects in the vicinity of the proposed location of the unit and comply with the stipulation of Company Act 2013. A copy of such projects shall be sent to the Commissioner for Industrial Development & Director of Industries and Commerce for monitoring.
5. **Others:**
   a) The company shall adopt rainwater harvesting, waste water recycling and water conservation techniques. Zero discharge facility should be adopted wherever applicable.
   b) The company shall take all statutory and other necessary clearances from the competent authorities including Govt. of India and shall submit milestones/progress in the implementation of the project regularly, which will be monitored by the Department.

This approval is valid for a period of **two years** from the date of issue of this Government Order.

By Order and in the name of the Governor of Karnataka,

**S. UMADEVI**

Desk Officer (Technical Cell),

Commerce & Industries Department.

**PR. 501**

## ಆರ್ಥಿಕ ಸಚಿವಾಲಯ

### ಸುತ್ತೋಲೆ

**ಸಂಖ್ಯೆ: ಆಇ 50 ಆಖಇ 2014, ಬೆಂಗಳೂರು, ದಿನಾಂಕ: 21ನೇ ಮೇ, 2014**

**ವಿಷಯ :** ಸಾರ್ವಜನಿಕ ಉದ್ಯೋಗದ ನೇಮಕಾತಿಗಳಲ್ಲಿ ಹೈದರಾಬಾದ್ – ಕರ್ನಾಟಕ ಪ್ರದೇಶಕ್ಕೆ ಕಲ್ಪಿಸಿರುವ ಮೀಸಲಾತಿಯನ್ವಯ ರಾಜ್ಯ ಖಜಾನೆ ಇಲಾಖೆಯ ಗ್ರೂಪ್–ಎ ಕಿರಿಯ ಶ್ರೇಣಿಯ ಸ್ಥಳೀಯ ವೃಂದಕ್ಕೆ ಹಂಚಿಕೆ ಹೊಂದಲು ಅಭಿಮತ ನೀಡುವ ಕುರಿತು.

**ಉಲ್ಲೇಖ :**
1) ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ಆದೇಶ, 2013, ದಿನಾಂಕ: 06–11–2013.
2) ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ (ಸ್ಥಳೀಯ ವೃಂದಗಳ ರಚನೆ, ಹಂಚಿಕೆ ಮತ್ತು ವ್ಯಕ್ತಿಗಳ ವರ್ಗಾವಣೆ) ನಿಯಮಗಳು, 2013.
3) ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ (ಅರ್ಹತಾ ಪ್ರಮಾಣ ಪತ್ರಗಳ ನೀಡಿಕೆ) ನಿಯಮಗಳು, 2013.
4) ಅಧಿಸೂಚನೆ ಸಂಖ್ಯೆ: ಎಫ್‌ಡಿ 50 ಆಖಇ 2014, ದಿನಾಂಕ: 15–04–2014

ಉಲ್ಲೇಖ (1)ರ ದಿನಾಂಕ: 06–11–2013ರ ಆದೇಶದಲ್ಲಿ ಕರ್ನಾಟಕ ಸಾರ್ವಜನಿಕ ಉದ್ಯೋಗದ ನೇಮಕಾತಿಗಳಲ್ಲಿ ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ಮೀಸಲಾತಿಯನ್ನು ಕಲ್ಪಿಸಿದೆ. ಸದರಿ ಆದೇಶದ 3 ಮತ್ತು 13ನೇ ಕಂಡಿಕೆಗಳಿಗೆ ಅನುಗುಣವಾಗಿ, ವೃಂದ ನಿಯಂತ್ರಣ ಪ್ರಾಧಿಕಾರವು ನಿರ್ದಿಷ್ಟಪಡಿಸಿದ ರೀತಿಯಲ್ಲಿ ಸ್ಥಳೀಯ ವೃಂದಗಳನ್ನು ರಚಿಸಿ, ಪ್ರತಿಯೊಂದು ವೃಂದಗಳಲ್ಲಿನ ಹುದ್ದೆಗಳ ಸಂಖ್ಯೆಯನ್ನು ಗುರುತಿಸತಕ್ಕದ್ದಾಗಿದೆ. ಮುಂದುವರೆದು, ಈ ರೀತಿ ಗುರುತಿಸಲಾದ ಸ್ಥಳೀಯ ವೃಂದದಲ್ಲಿನ ಹುದ್ದೆಗಳನ್ನು ಸಂಬಂಧಪಟ್ಟ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ಅನುಸಾರವಾಗಿ ಮುಂಬಡ್ತಿ ಅಥವಾ ನೇರ ನೇಮಕಾತಿಯಡಿ ಸ್ಥಳೀಯ ವ್ಯಕ್ತಿಗಳಿಗೆ ಮೀಸಲಿಡತಕ್ಕದ್ದಾಗಿದೆ. ಈ ಬಗ್ಗೆ ಉಲ್ಲೇಖಿತ (2) ಮತ್ತು (3)ರಲ್ಲಿನ ನಿಯಮಗಳನ್ನೂ ಸಹ ಸರ್ಕಾರವು ರಚಿಸಿರುತ್ತದೆ.

2. ಮೇಲೆ ತಿಳಿಸಿದ ಆದೇಶ ಮತ್ತು ನಿಯಮಗಳನುಸಾರ, ರಾಜ್ಯ ಖಜಾನೆ ಇಲಾಖೆಯ ಜಿಲ್ಲಾ ಖಜಾನಾಧಿಕಾರಿ (ಗ್ರೂಪ್–ಎ ಕಿರಿಯ ಶ್ರೇಣಿ) ವೃಂದದಲ್ಲಿ ಸ್ಥಳೀಯ ವೃಂದವನ್ನು ಮೇಲೆ ಉಲ್ಲೇಖ (4)ರ ಅಧಿಸೂಚನೆಯಲ್ಲಿ ರಚಿಸಲಾಗಿರುತ್ತದೆ.

3. ಉಲ್ಲೇಖ (1)ರ ಆದೇಶ ದಿನಾಂಕ: 06–11–2013ರಲ್ಲಿ **"ಸ್ಥಳೀಯ ವೃಂದ"** ಹಾಗೂ **"ಸ್ಥಳೀಯ ವ್ಯಕ್ತಿ"** ಎಂಬುದನ್ನು ಈಗಾಗಲೇ ವ್ಯಾಖ್ಯಾನಿಸಲಾಗಿದೆ. ಮುಂದುವರೆದು, ಸದರಿ ಆದೇಶದ ಕಂಡಿಕೆ–4ರ ಉಪ ಕಂಡಿಕೆ (2)ರ ಪ್ರಕಾರ ಹೈದರಾಬಾದ್–ಕರ್ನಾಟಕ ಪ್ರದೇಶದ ಅಧಿಕಾರಿಗಳಿಂದ ಸ್ಥಳೀಯ ವೃಂದವನ್ನು ಆಯ್ಕೆ ಮಾಡಿಕೊಳ್ಳುವ ಬಗ್ಗೆ ಅಭಿಮತ ನೀಡಲು ಅವಕಾಶ ಕಲ್ಪಿಸಲಾಗಿದೆ. ಅಲ್ಲದೆ, ಉಲ್ಲೇಖಿತ (2)ರ ನಿಯಮಗಳ ನಿಯಮ 6ರ ಉಪ ನಿಯಮ (1)ರ ಪ್ರಕಾರ ಪ್ರಸ್ತುತ ಸೇವೆಯಲ್ಲಿರುವ ಅಧಿಕಾರಿಗಳು ಸ್ಥಳೀಯ ವ್ಯಕ್ತಿಗಳ ಮಾನದಂಡವನ್ನು ಪೂರೈಸುವ ನಿಗದಿತ ನಮೂನೆಗಳಲ್ಲಿ ಅರ್ಹತಾ ಪ್ರಮಾಣ ಪತ್ರದೊಂದಿಗೆ ಸ್ಥಳೀಯ ವೃಂದವನ್ನು ಸೇರಲು 30 ದಿನಗಳೊಳಗಾಗಿ ತಮ್ಮ ಆಯ್ಕೆಯನ್ನು ಅಭಿಮತದ ಮೂಲಕ ಚಲಾಯಿಸಲು ಈ ಮೂಲಕ ಅವಕಾಶವನ್ನು ಕಲ್ಪಿಸಲಾಗಿದೆ.

4. ತತ್ಸಂಬಂಧ ಮೇಲಿನ ಉಲ್ಲೇಖ (3)ರಲ್ಲಿನ ನಿಯಮಗಳಲ್ಲಿ **"ಸ್ಥಳೀಯ ವ್ಯಕ್ತಿ"** ಎಂಬ ಮೀಸಲಾತಿಯನ್ನು ಕ್ಲೈಮ್ ಮಾಡುವ ಸಂಬಂಧ ಆರು ವಿವಿಧ ಪ್ರಮಾಣ ಪತ್ರಗಳನ್ನು ಆಧಾರವಾಗಿ ಗುರುತಿಸಲಾಗಿದೆ. ಈ ಪೈಕಿ ಹಾಲಿ ಸೇವೆಯಲ್ಲಿರುವ ಅಧಿಕಾರಿ/ನೌಕರರು ಸೇವಾ ಪುಸ್ತಕದಲ್ಲಿ ನಮೂದಿಸಲಾಗಿರುವ ಸ್ವಗ್ರಾಮ ಅಥವಾ ಸ್ಥಳದ ಆಧಾರದ ಮೇಲೆ ನಿಗದಿತ ನಮೂನೆಯಲ್ಲಿ ಸ್ವಗ್ರಾಮ ಪ್ರಮಾಣ ಪತ್ರ ಪಡೆದಿದ್ದಲ್ಲಿ ಪುನ: ಈ ನಿಯಮಗಳ ನಿಯಮ 3ರಡಿ ನಿರ್ದಿಷ್ಟಪಡಿಸಿರುವ ರೀತ್ಯ ಅರ್ಹತಾ ಪ್ರಮಾಣ ಪತ್ರವನ್ನು ಪಡೆಯುವುದು ಅಗತ್ಯವಿರುವುದಿಲ್ಲ. ಉಳಿದ 5 ಪ್ರಮಾಣ ಪತ್ರಗಳ ಸಂಬಂಧ ಸಕ್ಷಮ ಪ್ರಾಧಿಕಾರವು ನೀಡುವ ಅರ್ಹತಾ ಪ್ರಮಾಣ ಪತ್ರವನ್ನು ಪಡೆಯುವುದು ಕಡ್ಡಾಯವಾಗಿರುತ್ತದೆ. ಸದರಿ 5 ಪ್ರಮಾಣ ಪತ್ರಗಳ ನಮೂನೆಯ ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿದೆ.

5. ಈ ಹಿನ್ನೆಲೆಯಲ್ಲಿ, ಖಜಾನೆ ಇಲಾಖೆಯ ವ್ಯಾಪ್ತಿಯಡಿ ಬರುವ ಜಿಲ್ಲಾ ಖಜಾನಾಧಿಕಾರಿ ವೃಂದದಲ್ಲಿನ ಅಧಿಕಾರಿಗಳು ಸ್ಥಳೀಯ ವೃಂದಕ್ಕೆ ಆಯ್ಕೆ ಮಾಡುವ ಕುರಿತು ಅಭಿಮತವನ್ನು ಈ ಸುತ್ತೋಲೆಗೆ ಲಗತ್ತಿಸಿರುವ ನಿಗದಿತ ನಮೂನೆಯಲ್ಲಿ ಈ ಸುತ್ತೋಲೆ ಹೊರಡಿಸಿದ ದಿನಾಂಕದಿಂದ 30 ದಿನಗಳೊಳಗಾಗಿ ಅಂದರೆ ದಿನಾಂಕ: 21.06.2014 ರೊಳಗೆ ಸರ್ಕಾರಕ್ಕೆ ಸಲ್ಲಿಸತಕ್ಕದ್ದು. ಒಂದು ವೇಳೆ ನಿಗದಿತ ಅವಧಿಯೊಳಗೆ ಅಧಿಕಾರಿಗಳು ತಮ್ಮ ಆಯ್ಕೆಯನ್ನು ಚಲಾಯಿಸದಿದ್ದಲ್ಲಿ, ಉಲ್ಲೇಖ (2)ರ ನಿಯಮಗಳ ನಿಯಮ 6(1)ರ ಅನುಸಾರ, ಅವರು ಸ್ಥಳೀಯ ವೃಂದವನ್ನು ಸೇರಲು ಇಚ್ಛೆ ಹೊಂದಿಲ್ಲವೆಂದು ಪರಿಗಣಿಸಲಾಗುವುದು.

6. ಖಜಾನೆ ಆಯುಕ್ತರು, ನಿರ್ದೇಶಕರು ಮತ್ತು ಜಂಟಿ ನಿರ್ದೇಶಕರು, ಉಪ ನಿರ್ದೇಶಕರು ಮತ್ತು ಜಿಲ್ಲಾ ಖಜಾನಾಧಿಕಾರಿಗಳು ತಮ್ಮ ಕಛೇರಿಗಳ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿರುವ ಜಿಲ್ಲಾ ಖಜಾನಾಧಿಕಾರಿ ವೃಂದದ ಅಧಿಕಾರಿಗಳಿಗೆ ಈ ಸುತ್ತೋಲೆಯನ್ನು ಗಮನಕ್ಕೆ ತರುವುದು.

**ಎನ್. ಲಕ್ಷ್ಮಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ
(ಆಡಳಿತ & ಮುಂಗಡ)

ಅನುಬಂಧ – ಎ

## ಸ್ವಗ್ರಾಮ ಪ್ರಮಾಣಪತ್ರ

[ಅನುಚ್ಛೇದ 371 (ಜೆ) ಮೇರೆಗೆ]
(5 (2)ನೇ ನಿಯಮ ನೋಡಿ)

[ಪ್ರಮಾಣಪತ್ರಗಳ ನೀಡಿಕೆಗಾಗಿ ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ನಿಯಮಗಳು, 2013]

ಶ್ರೀ/ ಶ್ರೀಮತಿ ------------------ ರವರು ------------------ ರವರ ಮಗ/ ಹೆಂಡತಿಯಾಗಿದ್ದು, ಇವರು ಕರ್ನಾಟಕ ರಾಜ್ಯದ ------------------ ಜಿಲ್ಲೆಯ ------------- ತಾಲ್ಲೂಕಿನ, ------------------ ಗ್ರಾಮ/ ಪಟ್ಟಣವನ್ನು ತನ್ನ ಸೇವಾ ಪುಸ್ತಕದಲ್ಲಿ ತನ್ನ ಸ್ವಗ್ರಾಮ/ ಸ್ಥಳ ಎಂದು ಘೋಷಿಸಿರುತ್ತಾರೆ.

ಸೇವಾ ಪುಸ್ತಕದಲ್ಲಿರುವ ನಮೂದನ್ನು ನಾನು ಖುದ್ದಾಗಿ ಪರಿಶೀಲಿಸಿದ್ದೇನೆ ಮತ್ತು ಮೇಲಿನ ನಮೂದು 01–01–2013ಕ್ಕೆ ಮುಂಚೆ ಸೇವಾ ಪುಸ್ತಕದಲ್ಲಿ ಇತ್ತೆಂದು ಸ್ವತಃ ಮನವರಿಕೆ ಮಾಡಿಕೊಂಡಿರುತ್ತೇನೆ.

ಸ್ಥಳ: ------------------------
ದಿನಾಂಕ: ----------------

ಹೆಸರು ----------------
ಪದನಾಮ ------------
ಕಛೇರಿ --------------
ಇಲಾಖೆ ------------

ಅನುಬಂಧ – ಬಿ

## ಅರ್ಹತಾ ಪ್ರಮಾಣಪತ್ರ

[ಅನುಚ್ಛೇದ 371 (ಜೆ) ಮೇರೆಗೆ]
(5 (3)ನೇ ನಿಯಮ ನೋಡಿ)

[ಪ್ರಮಾಣಪತ್ರ ನೀಡಲು ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ನಿಯಮಗಳು, 2013]

ಶ್ರೀ/ ಶ್ರೀಮತಿ ---------------- ರವರು ------------------ ರವರ ಮಗ/ ಹೆಂಡತಿಯಾಗಿದ್ದು, ಇವರು ಕರ್ನಾಟಕ ರಾಜ್ಯದ ---------------- ಜಿಲ್ಲೆಯ ------------ ತಾಲ್ಲೂಕಿನ ------------------ ಗ್ರಾಮ/ ಪಟ್ಟಣದ ಒಬ್ಬ ಸ್ಥಳೀಯ ವ್ಯಕ್ತಿಯಾಗಿರುತ್ತಾರೆ.

ಸ್ಥಳ: ------------------------
ದಿನಾಂಕ: ----------------

ಹೆಸರು ----------------
ಅಸಿಸ್ಟೆಂಟ್ ಕಮೀಷನರ್
------------ ಉಪ ವಿಭಾಗ
------------ ಜಿಲ್ಲೆ

ಅನುಬಂಧ-ಸಿ

## ಸ್ಥಳೀಯ ವೃಂದದ ಸೇರಿಕೆಗಾಗಿ ಅರ್ಜಿ

(371 (ಜೆ) ಅನುಚ್ಛೇದದ ಮೇರೆಗೆ)
(6ನೇ ನಿಯಮ ನೋಡಿ)

[ಸ್ಥಳೀಯ ರಚನೆ, ವೃಂದಗಳು, ಹಂಚಿಕೆ ಮತ್ತು ವ್ಯಕ್ತಿಗಳ ವರ್ಗಾವಣೆಗಾಗಿ ಕರ್ನಾಟಕ ಸಾರ್ವಜನಿಕ ಉದ್ಯೋಗದಲ್ಲಿ (ಹೈದರಾಬಾದ್-ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ನಿಯಮಗಳು, 2013]

1. ಸ್ಥಳೀಯ ವೃಂದದ ಹೆಸರು : ____________
2. ಇಲಾಖೆ : ____________
3. ಜಿಲ್ಲೆ (ಸಂಬಂಧಿಸಿದ್ದರೆ) : ____________
4. ಅರ್ಜಿದಾರನ ಹೆಸರು : ____________
5. ಪ್ರಸ್ತುತ ಹುದ್ದೆಯಲ್ಲಿರುವ ಸ್ಥಳ : ____________
6. ಹುದ್ದೆಯ ಹೆಸರು (ಪದನಾಮ) : ____________

ನಾನು ಈ ಮೇಲೆ ಹೇಳಿದ ವೃಂದವನ್ನು ಸೇರಲು ಇಚ್ಛಿಸುವುದಾಗಿ ಮನವಿ ಮಾಡುತ್ತೇನೆ. ನಾನು ಸ್ಥಳೀಯ ವ್ಯಕ್ತಿಯಾಗಿದ್ದು ನನ್ನ ಕ್ಲೇಮಿನ ರುಜುವಾತಾಗಿ ನನ್ನ ಸ್ವಗ್ರಾಮ/ಅರ್ಹತಾ ಪ್ರಮಾಣ ಪತ್ರವನ್ನು ಈ ಮೂಲಕ ಲಗತ್ತಿಸಿದ್ದೇನೆ.

ಸ್ಥಳ: ____________ ಹೆಸರು: ____________
ದಿನಾಂಕ: ____________ ವಿಳಾಸ: ____________
____________
____________
ಮೊಬೈಲ್ ಸಂಖ್ಯೆ: ____________

## ಅನುಬಂಧ – ಎ

### ಅರ್ಹತಾ ಪ್ರಮಾಣಪತ್ರ

[ಅನುಚ್ಛೇದ 371 (ಜೆ) ಮೇರೆಗೆ]
( 3(3)ನೇ ನಿಯಮ ನೋಡಿ )

[ಪ್ರಮಾಣಪತ್ರ ನೀಡಲು ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ನಿಯಮಗಳು, 2013]

ಶ್ರೀ/ ಶ್ರೀಮತಿ ------------------- ರವರು ------------------- ರವರ ಮಗ/ ಹೆಂಡತಿಯಾಗಿದ್ದು, ಇವರು ಕರ್ನಾಟಕ ರಾಜ್ಯದ --------------- ಜಿಲ್ಲೆಯ ------------- ತಾಲ್ಲೂಕಿನ ------------------- ಗ್ರಾಮ/ ಪಟ್ಟಣದ ಸ್ಥಳೀಯ ವ್ಯಕ್ತಿಯಾಗಿದ್ದಾರೆ.

ಸ್ಥಳ: --------------------------
ದಿನಾಂಕ: ----------------

ಹೆಸರು -------------------
ಅಸಿಸ್ಟೆಂಟ್ ಕಮೀಷನರ್
------------ ಉಪ ವಿಭಾಗ
------------ ಜಿಲ್ಲೆ

## ಅನುಬಂಧ – ಬಿ

### ವಾಸಸ್ಥಳ ಪ್ರಮಾಣಪತ್ರ

(ಅನುಚ್ಛೇದ 371 (ಜೆ) ಮೇರೆಗೆ)
(ನಿಯಮ 4 (ಬಿ) (2) (iii) ನೋಡಿ)

[ಪ್ರಮಾಣಪತ್ರಗಳ ನೀಡಿಕೆಗಾಗಿ ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ನಿಯಮಗಳು, 2013]

ಶ್ರೀ/ ಶ್ರೀಮತಿ ------------------- ರವರು ------------------- ರವರ ಮಗ/ ಹೆಂಡತಿಯಾಗಿದ್ದು, ಇವರು ----------------- ಜಿಲ್ಲೆಯ -------------- ತಾಲ್ಲೂಕಿನ ------ -------------- ಗ್ರಾಮ/ ಪಟ್ಟಣದ ಈ ಕೆಳಕಂಡ ವಿಳಾಸದಲ್ಲಿ ಕೆಳಗೆ ಸೂಚಿಸಿರುವ ಅವಧಿಯಲ್ಲಿ ವಾಸವಿರುತ್ತಾರೆಂದು ಪ್ರಮಾಣೀಕರಿಸಲಾಗಿದೆ:

| ಕ್ರ. ಸಂ. | ವಿಳಾಸ | ಯಾವ ದಿನಾಂಕದಿಂದ ಯಾವ ದಿನಾಂಕದವರೆಗೆ | ಸಾಕ್ಷ್ಯ ವಿವರ (ಆಧಾರವಾಗಿಟ್ಟುಕೊಂಡಿರುವ ಸಾಕ್ಷ್ಯದ ಎಲ್ಲಾ ಪ್ರಮಾಣೀಕೃತ ಪ್ರತಿಗಳನ್ನು ಲಗತ್ತಿಸಿ) |
|---|---|---|---|
| 1 | | | |
| 2 | | | |
| 3 | | | |
| 4 | | | |
| 5 | | | |
| 6 | | | |

ಸಾಕ್ಷ್ಯದಲ್ಲಿ ಹೇಳಲಾದ ಎಲ್ಲಾ ಲಗತ್ತುಗಳನ್ನು ಕೋಷ್ಟಕದಲ್ಲಿ ಸಂಕ್ಷಿಪ್ತವಾಗಿ ಅಳವಡಿಸಿ

ಸ್ಥಳ: --------------------------
ದಿನಾಂಕ: ----------------

ಹೆಸರು -----------------
ತಹಸೀಲ್ದಾರ್ ------------
------------ ತಾಲ್ಲೂಕು
------------ ಜಿಲ್ಲೆ

ಅನುಬಂಧ – ಸಿ

## ವ್ಯಾಸಂಗ ಪ್ರಮಾಣಪತ್ರ

[ಅನುಚ್ಛೇದ 371 (ಜೆ) ಮೇರೆಗೆ]

(ನಿಯಮ 4 (ಸಿ)(2)(ii) ನೋಡಿ)

[ಪ್ರಮಾಣಪತ್ರಗಳ ನೀಡಿಕೆಗಾಗಿ ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ನಿಯಮಗಳು, 2013]

ಶ್ರೀ/ ಶ್ರೀಮತಿ ------------------------ ರವರು ------------------------ ರವರ ಮಗ/ ಹೆಂಡತಿಯಾಗಿದ್ದು ಇವರು ---------------------- ಜಿಲ್ಲೆಯ------------------------ ತಾಲ್ಲೂಕಿನ ---------------------- ಕಾಲೇಜು/ ಶಾಲೆಯಲ್ಲಿ ಈ ಕೆಳಗೆ ಸೂಚಿಸಲಾದ ಅವಧಿಯಲ್ಲಿ ವ್ಯಾಸಂಗ ಮಾಡಿರುತ್ತಾರೆಂದು ಪ್ರಮಾಣೀಕರಿಸಲಾಗಿದೆ:

| ಕ್ರ. ಸಂ. | ತರಗತಿ / ಹಂತ | ಯಾವ ದಿನಾಂಕದಿಂದ ಯಾವ ದಿನಾಂಕದ ವರೆಗೆ | ದಾಖಲೆಯ ಉಲ್ಲೇಖ |
|---|---|---|---|
| | | | |

ಇವನು ಈ ಕೆಳಕಂಡ ವರ್ಷಗಳಲ್ಲಿ ಈ ಕೆಳಕಂಡ ಪರೀಕ್ಷೆಗಳಲ್ಲಿ ಉತ್ತೀರ್ಣನಾಗಿದ್ದಾನೆ/ ಅನುತ್ತೀರ್ಣನಾಗಿದ್ದಾನೆ:-

| ಕ್ರ. ಸಂ. | ತರಗತಿ/ ಪರೀಕ್ಷೆ/ ಹಂತದ ಹೆಸರು | ವರ್ಷ | ಅನುತ್ತೀರ್ಣ/ ಉತ್ತೀರ್ಣ | ದಾಖಲೆಯ ಉಲ್ಲೇಖ |
|---|---|---|---|---|
| | | | | |

ಸ್ಥಳ: ---------------------------------

ದಿನಾಂಕ: ----------------------

ಹೆಸರು ------------------------

ಸಂಸ್ಥೆಯ ಮುಖ್ಯಸ್ಥರು

## ಪ್ರಮಾಣಪತ್ರ

ಮೇಲೆ ನೀಡಲಾದ ಪ್ರಮಾಣಪತ್ರವು ಲಭ್ಯವಿರುವ ದಾಖಲೆಯ ಪ್ರಕಾರ ಸತ್ಯವಾಗಿದೆ ಎಂಬುದನ್ನು ನಾನು ಸ್ವತಃ ಮನವರಿಕೆ ಮಾಡಿಕೊಂಡಿದ್ದೇನೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ: ---------------------------------

ದಿನಾಂಕ: ----------------------

ಹೆಸರು ------------------------

ಕ್ಷೇತ್ರ ಶಿಕ್ಷಣಾಧಿಕಾರಿ -------------

-------------- ತಾಲ್ಲೂಕು

-------------- ಜಿಲ್ಲೆ

ಅನುಬಂಧ – ಡಿ

## ಸ್ವಗ್ರಾಮ ಪ್ರಮಾಣಪತ್ರ

## (Home Town Certificate)

[ಅನುಚ್ಛೇದ 371 (ಜೆ) ಮೇರೆಗೆ]

(4 (ಇ) ನಿಯಮ ನೋಡಿ)

[ಪ್ರಮಾಣಪತ್ರಗಳ ನೀಡಿಕೆಗಾಗಿ ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್-ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ನಿಯಮಗಳು, 2013]

ಶ್ರೀ/ ಶ್ರೀಮತಿ ---------------- ರವರು ---------------- ರವರ ಮಗ/ ಹೆಂಡತಿಯಾಗಿದ್ದು, ಇವರು ಕರ್ನಾಟಕ ರಾಜ್ಯದ ---------------- ಜಿಲ್ಲೆಯ ------------ ತಾಲ್ಲೂಕಿನ ---------------- ಗ್ರಾಮ/ ಪಟ್ಟಣವನ್ನು ತನ್ನ ಸ್ವಗ್ರಾಮ/ ಸ್ಥಳ ಎಂದು ತನ್ನ ಸೇವಾ ಪುಸ್ತಕದಲ್ಲಿ ಘೋಷಿಸಿರುತ್ತಾರೆ.

ಸೇವಾ ಪುಸ್ತಕದಲ್ಲಿರುವ ನಮೂದನ್ನು ನಾನು ಖುದ್ದಾಗಿ ಪರಿಶೀಲಿಸಿದ್ದೇನೆ ಮತ್ತು ಮೇಲಿನ ನಮೂದು 01-01-2013ಕ್ಕೆ ಮುಂಚೆ ಸೇವಾ ಪುಸ್ತಕದಲ್ಲಿ ನಮೂದು ಮಾಡಲಾಗಿತ್ತೆಂದು ಸ್ವತಃ ಮನವರಿಕೆ ಮಾಡಿಕೊಂಡಿರುತ್ತೇನೆ.

ಸ್ಥಳ: ------------------------

ದಿನಾಂಕ: ----------------

ಹೆಸರು ----------------

ಪದನಾಮ ------------

ಕಛೇರಿ ------------

ಇಲಾಖೆ ------------

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



ಅನುಬಂಧ – ಇ

## ಸಿಂಧುತ್ವ ಪ್ರಮಾಣಪತ್ರ

(ಅನುಚ್ಛೇದ 371 (ಜೆ) ಮೇರೆಗೆ)
(ನಿಯಮ 6(3) ನೋಡಿ)

[ಪ್ರಮಾಣಪತ್ರಗಳ ನೀಡಿಕೆಗಾಗಿ ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್-ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ನಿಯಮಗಳು, 2013]

ಶ್ರೀ/ ಶ್ರೀಮತಿ ---------------- ರವರು ---------------- ರವರ ಮಗ/ ಹೆಂಡತಿಯಾಗಿದ್ದು, ಇವರು ಕರ್ನಾಟಕ ರಾಜ್ಯದ ---------------- ಜಿಲ್ಲೆಯ ---------------- ತಾಲ್ಲೂಕಿನ ---------------- ಗ್ರಾಮ/ ಪಟ್ಟಣದ ಸ್ಥಳೀಯ ವ್ಯಕ್ತಿಯಾಗಿರುತ್ತಾರೆ.

ನಾವು ಅರ್ಹತಾ ಪ್ರಮಾಣಪತ್ರದ ಸರಿತನವನ್ನು ಪರಿಶೀಲಿಸಿದ್ದೇವೆ ಹಾಗೂ ಅದನ್ನು ಮಾನ್ಯ ಮಾಡಿದ್ದೇವೆ.

ಸ್ಥಳ: ----------------
ದಿನಾಂಕ: ----------------

ಹೆಸರು ----------------
ಜಿಲ್ಲಾಧಿಕಾರಿ ----------------
---------------- ಜಿಲ್ಲೆ

ಹೆಸರು ----------------
ಸೂಪರಿಂಟೆಂಡೆಂಟ್ ಆಫ್ ಪೊಲೀಸ್
---------------- ಜಿಲ್ಲೆ

ಹೆಸರು ----------------
ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ
ಜಿಲ್ಲಾ ಪಂಚಾಯತ್
---------------- ಜಿಲ್ಲೆ

**ಎನ್. ಲಕ್ಷ್ಮಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ
(ಆಡಳಿತ & ಮುಂಗಡ)

**P.R. 478**
**SC 100**

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59